ನವಸಾಕ್ಷರ ಪುಸ್ತಕ ಮಾಲೆ ೨೧

# ಈಸೋಪನ ಕಥೆಗಳು

ಸಿ. ಎಚ್. ಭಾಗ್ಯ








ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಲೋಕಶಿಕ್ಷಣ ನಿರ್ದೇಶನಾಲಯ
ನವಸಾಕ್ಷರ ಪುಸ್ತಕ ಮಾಲೆ - ೨೧

# ಈಸೋಪನ ಕಥೆಗಳು

ಸಿ. ಎಚ್. ಭಾಗ್ಯ







ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ - ೫೮೩ ೨೨೧

ESOPANA KATHEGALU : By C. H. Bhagya, Published by The Director of Prasaranga, Kannada University, Hampi - 583 211, KARNATAKA.
First Impression 1994, Pp. ii + 26, Rs. 8.00.

---



**ಸಂಯೋಜನಾಧಿಕಾರಿ**
ಎಚ್.ಎಸ್. ಶ್ರೀಮತಿ
ಪಠ್ಯ ಪುಸ್ತಕ ರಚನಾ ವಿಭಾಗ

**ಪ್ರಕಾಶಕರು**
ನಿರ್ದೇಶಕರು
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ - ೫೮೩ ೨೧೧

**ಮುಖಪುಟ ವಿನ್ಯಾಸ**
ಕೆ. ಮಕಾಳಿ

**ಬೆಲೆ : ರೂ. ೮.೦೦**

**ಮುದ್ರಕರು**
ವಿನಾಯಕ ಆಫ್‌ಸೆಟ್ ಪ್ರಿಂಟರ್‍ಸ್
8/1, ಮಾರೇನಹಳ್ಳಿ, 1ನೇ ಕ್ರಾಸ್, 23ನೇ ಮೇನ್,
ಜೆ. ಪಿ. ನಗರ, ಬೆಂಗಳೂರು-560 078.
ಫೋನ್: 642102



# ಈಸೋಪನ ಕಥೆಗಳು

ಈಸೋಪನ ಹೆಸರು ಕೇಳದವರು ಇರಬಹುದು. ಆದರೆ ಅವನ ನೀತಿ ಕಥೆಗಳನ್ನು ಕೇಳದವರು ಇಲ್ಲವೇ ಇಲ್ಲ. 'ಚಿನ್ನದ ಮೊಟ್ಟೆ ಇಡುವ ಬಾತುಕೋಳಿ,' 'ದ್ರಾಕ್ಷಿ ಹುಳಿ' ಎಂದ ನರಿ - ಇವೆಲ್ಲಾ ನಮ್ಮ ನುಡಿಗಟ್ಟಿನಲ್ಲೇ ಸೇರಿ ಹೋಗಿವೆ. ಈಸೋಪನ ಹೆಸರೇ ಗೊತ್ತಿಲ್ಲದವರಿಗೂ ಇವೆಲ್ಲಾ ತಿಳಿದಿರುತ್ತದೆ.

ಈಸೋಪ, ಕಥೆಗಳನ್ನು ಹೇಳಿರಬೇಕು. ಬರೆದಿಲ್ಲ. ಏಕೆಂದರೆ ಇವನ ಕಥೆಗಳ ಸಂಖ್ಯೆ ಎಷ್ಟು ಎಂದೇ ತಿಳಿದಿಲ್ಲ. ಜನಪ್ರಿಯ ಕೃತಿಯನ್ನು ಓದಿದ, ಕೇಳಿದ ಜನಗಳು ಅದಕ್ಕೆ ತಮ್ಮದೇ ಆದ ಕಥೆಗಳನ್ನು ಸೇರಿಸುವುದುಂಟು. ಹಾಗಾಗಿ ಇವನ ಹೆಸರಿನಲ್ಲಿ ಅನೇಕ ಕಥೆಗಳು ಇದರಲ್ಲಿ ಸೇರಿಹೋಗಿವೆ. ನಮ್ಮ ವಚನಕಾರರು ಮತ್ತು ದಾಸರ ರಚನೆಗಳಿಗೂ ಈ ಬಗೆಯ ಸೇರ್ಪಡೆ ಕಂಡುಬರುತ್ತದೆ. ಹೀಗೆ ಸೇರಿಸುವುದನ್ನು 'ಪ್ರಕ್ಷೇಪ'ಎಂದು ಕರೆಯುತ್ತಾರೆ. ಹೂವಿನ ಜತೆ ನಾರೂ ಸ್ವರ್ಗ ಸೇರುವ ಬಯಕೆ ಇಲ್ಲಿ ಕಂಡು ಬರುತ್ತದೆ. ಕಾಲಾಂತರದಲ್ಲಿ ಹೀಗೆ ಸೇರುತ್ತಾ ಹೋಗುವುದರಿಂದ ಯಾವುದು ಮೂಲ ಎನ್ನುವುದೇ ಸರಿಯಾಗಿ ಗೊತ್ತಾಗುವುದಿಲ್ಲ. ಈಸೋಪನ ಹೆಸರಿನಲ್ಲಿ ದೊರೆಯುವ ಕತೆಗಳನ್ನೆಲ್ಲಾ ಈಸೋಪನ ನೀತಿಕತೆಗಳು ಎಂದು ಕರೆಯಬಹುದು.

### ಕಥೆಗಳ ಸ್ವರೂಪ

ಈಸೋಪನ ಕಥೆಗಳು ಚಿಕ್ಕದಾಗಿರುತ್ತವೆ. ಈಸೋಪ ಎಷ್ಟು ಚಿಕ್ಕದಾಗಿ ಕಥೆ ಹೇಳಬಲ್ಲ ಎಂಬುದಕ್ಕೆ ಈ ಕಥೆ ಸಾಕ್ಷಿ.

ಒಂದು ಸಿಂಹ ತನ್ನ ಒಂದೇ ಮರಿಯೊಡನೆ ಆಡುತ್ತಿತ್ತು.

ಇದನ್ನು ಒಂದು ನರಿ ನೋಡಿ, 'ಅಯ್ಯೋ! ಒಂದೇ ಮರಿ' ಎಂದಿತು.

ಇದನ್ನು ಕೇಳಿದ ಸಿಂಹ ಗಂಭೀರವಾಗಿ 'ಹೌದು, ಸಿಂಹದ ಮರಿ!' ಎಂದಿತು

ಗುಣ ಮುಖ್ಯವೇ ಹೊರತು ಸಂಖ್ಯೆಯಲ್ಲ ಎಂಬುದನ್ನು ಇದಕ್ಕಿಂತ ಅಡಕವಾಗಿ ಹೇಳಲು ಸಾಧ್ಯವೆ?

ಈಸೋಪನ ಹೆಚ್ಚಿನ ಕಥೆಗಳಲ್ಲಿ ಪ್ರಾಣಿ ಪಕ್ಷಿಗಳೇ ನಾಯಕರು. ಮನುಷ್ಯ ಸ್ವಭಾವವನ್ನು ಚಿತ್ರಿಸಲು ಪ್ರಾಣಿಗಳನ್ನು ಏಕೆ ಬಳಸಿದ ? ಬಹುಶಃ ಒಂದೊಂದು ಪ್ರಾಣಿಯೂ ಒಂದೊಂದು ಗುಣಕ್ಕೆ ತನ್ನಿಂದ ತಾನೇ ಸಂಕೇತವಾಗುವುರಿಂದ ಇರಬೇಕು.

ಉದಾ : ನರಿ - ಕುಟಿಲತೆಗೆ, ಸಿಂಹ - ಬಲಕ್ಕೆ, ತೋಳ - ಸಮಯ ಸಾಧಕತನಕ್ಕೆ ಇತ್ಯಾದಿ.

ಈಸೋಪನ ಕಥೆಗಳು ಚಿಕ್ಕವು ಆಗಿರುವಂತೆ ಸರಳವೂ ಆಗಿವೆ.

### ಈಸೋಪನ ಕಥೆಗಳು

ಒಂದೇ ನೀತಿಯನ್ನು ಹೇಳುವ ಹಲವು ಕಥೆಗಳು ಈಸೋಪನಲ್ಲಿ ಕಂಡುಬರುತ್ತವೆ ಮನುಷ್ಯನಿಗೆ ಬಹಳ ಮುಖ್ಯ ಎನ್ನಿಸುವ ನೀತಿಯನ್ನು ಹಲವು ರೀತಿಯಲ್ಲಿ ಈಸೋಪ ಹೇಳಿರಬಹುದು. ಅಥವಾ ಇಂತಹ ನೀತಿ ಮುಖ್ಯವೆಂದು ತಿಳಿದು ಆಮೇಲೆ ಜನಗಳು ಅವನ್ನು ಬರೆದು ಸೇರಿಸಿರಬಹುದು.

ಒಂದು ಕುತೂಹಲದ ಸಂಗತಿ ಎಂದರೆ, ಈಸೋಪನ ಕತ್ತೆಗಳ ಮೇಲಿನ ಒಲವು! ಅವನ ಬಹುಪಾಲು ಕಥೆಗಳಲ್ಲಿ ಕತ್ತೆಯೇ ನಾಯಕ! ಮನುಷ್ಯನ ಜಡತ್ವ, ಜಾಣ್ಮೆಯಿಲ್ಲದ ದುಡಿಮೆ ಇದನ್ನು ಹೇಳಲು ಕತ್ತೆಯೇ ಸರಿ ಎಂದು ಈಸೋಪನಿಗೆ ಅನಿಸಿರಬೇಕು. ಈಸೋಪ ಹಾಗೂ ಕತ್ತೆಯ ಒಂದು ಕತೆ ಹೀಗಿದೆ.

ಒಂದು ಕತ್ತೆ ಈಸೋಪನನ್ನು "ಮುಂದೆ ನನ್ನ ಮೇಲೆ ಬರೆಯುವ ಕಥೆಗಳಲ್ಲಿ ನನ್ನಿಂದ ಏನಾದರೂ ವಿವೇಕದ ಮಾತನಾಡಿಸು" ಎಂದು ಅಂಗಲಾಚಿತು.

ಈಸೋಪ ಹೇಳಿದ, "ನೀನು! ವಿವೇಕದ ಮಾತನಾಡುವುದೇ? ಆಗ, ಪ್ರಪಂಚ ನಿನ್ನನ್ನು ನೀತಿಬೋಧಕ ಎಂದೂ ನನ್ನನ್ನೂ ಕತ್ತೆ ಎಂದೂ ಕರೆಯುತ್ತದೆ!"

ಈಸೋಪನ ಹಾಸ್ಯ ಸ್ವಭಾವ, ಈ ಪುಟ್ಟ ಕಥೆಯಲ್ಲಿ ಕಂಡುಬರುತ್ತದೆ.

## ಈಸೋಪನ ಕೆಲವು ಜನಪ್ರಿಯ ಕಥೆಗಳು

ಈಸೋಪನ ಕೆಲವು ಕಥೆಗಳು ಜಗತ್ತಿನ ಎಲ್ಲೆಡೆ ಜನಪ್ರಿಯವಾಗಿ ನುಡಿಗಟ್ಟಿನ ಭಾಗವೇ ಆಗಿ ಹೋಗಿವೆ. ಅಂತಹ ಕೆಲವು ಕಥೆಗಳನ್ನು ಇಲ್ಲಿ ನೋಡೋಣ.

### ನಾಯಿ ನೆರಳು

ಒಂದು ನಾಯಿ ಮೂಳೆಯ ತುಂಡನ್ನು ಕಚ್ಚಿಕೊಂಡು ನದಿ ದಾಟುತ್ತಿತ್ತು. ನೀರಿನಲ್ಲಿ ತನ್ನದೇ ಬಿಂಬ ನೋಡಿತು. ಅದನ್ನು ಮೂಳೆ ಕಚ್ಚಿಕೊಂಡ ಇನ್ನೊಂದು ನಾಯಿ ಎಂದು ತಿಳಿಯಿತು. ಕಿತ್ತುಕೊಳ್ಳಲು ಬಾಯಿ ಬಿಟ್ಟಿತು! ಬಾಯಲ್ಲಿದ್ದ ಮೂಳೆ ನೀರು ಪಾಲಾಯಿತು.

ತನ್ನ ಮೂಳೆಯೂ ಇಲ್ಲ, ಇನ್ನೊಂದು ಮೂಳೆಯೂ ಇಲ್ಲ!

ನೀತಿ :- ದುರಾಸೆಯಿಂದ ಇರುವುದೂ ಹಾಳಾಗುತ್ತದೆ.



ನರಿಗೆ ದೊರಕದ ದ್ರಾಕ್ಷಿ

## 'ದ್ರಾಕ್ಷಿ ಹುಳಿ' ಎಂದ ನರಿ

ಒಂದು ನರಿ ದ್ರಾಕ್ಷಿ ತೋಟದಲ್ಲಿ ತೂಗಾಡುವ ಗೊಂಚಲನ್ನು ನೋಡಿತು. ಹತ್ತಿರ ಯಾರೂ ಇರಲಿಲ್ಲ ಜೊತೆಗೆ ಹಸಿವೂ ಆಗಿತ್ತು. ಆದ್ದರಿಂದ ದ್ರಾಕ್ಷಿ ತಿನ್ನಲು ಎಗರಿತು. ಎಗರಿತು. ಎಗರೇ ಎಗರಿತು. ದ್ರಾಕ್ಷಿ ಗೊಂಚಲು ಎತ್ತರದಲ್ಲಿದ್ದುದರಿಂದ ಏನು ಮಾಡಿದರೂ ಅದು ನರಿಗೆ ಸಿಗಲಿಲ್ಲ.

'ಥೂ ಈ ದ್ರಾಕ್ಷಿ ಹುಳಿ!' ಎಂದು ಅಲ್ಲಿಂದ ಓಡಿಹೋಯಿತು.

ನೀತಿ :- ಮನುಷ್ಯ ತನಗೆ ಸಿಗದುದನ್ನು ನಿಂದಿಸುತ್ತಾನೆ. (ಕುಣಿಯಲಾರದವಳು ನೆಲ ಡೊಂಕು ಅಂದ ಹಾಗೆ)

## ತೋಳ ಬಂತು ತೋಳ

ಒಬ್ಬ ಹುಡುಗ, ಬಯಲಲ್ಲಿ ಕುರಿ ಮೇಯಿಸುತ್ತಿದ್ದ. ಅವನಿಗೆ ಏಕೋ ಏನೋ ಅಕ್ಕ ಪಕ್ಕದ ಜನರನ್ನು ಕೀಟಲೆ, ಮಾಡಬೇಕೆನಿಸಿತು ಅದಕ್ಕೆ ಸುಮ್ಮ ಸುಮ್ಮನೆ ತೋಳ ಬಂತು ! ತೋಳ ! ಎಂದು ಜೋರಾಗಿ ಕೂಗಿದ.

ಪಕ್ಕದ ಹೊಲದಲ್ಲಿದ್ದ ರೈತರು ಕೆಲಸ ಬಿಟ್ಟು ಓಡೋಡಿ ಬಂದರು. ಹುಡುಗ, ಅವರ ಅವಾಂತರ ನೋಡಿ ನಕ್ಕ. ಮತ್ತು ಇದೇ ಚಾಳಿಯನ್ನು ಮುಂದುವರೆಸಿದ.

ಕೆಲದಿನ ಕಳೆಯಿತು. ನಿಜವಾಗಿಯೂ ತೋಳ ಬಂದು ಕುರಿಗಳ ಮೇಲೆ ಎರಗಿತು. ಮತ್ತೆ ಹುಡುಗ 'ತೋಳ ಬಂತು! ತೋಳ!' ಎಂದು ಅರಚಿದ.

ಇವನು ಸುಳ್ಳುಗಾರನೆಂದು ಅರಿತಿದ್ದ ಜನ ಹತ್ತಿರ ಸುಳಿಯಲಿಲ್ಲ. ತೋಳ, ಕುರಿಗಳ ಭೋಜನ ಮಾಡಿತು!

ನೀತಿ :- ಸುಳ್ಳು ಹೇಳುವವನು ವಿಪತ್ತಿಗೆ ಸಿಕ್ಕುತ್ತಾನೆ.



ಮೊಲ ಮತ್ತು ಆಮೆಯ ಮಧ್ಯೆ ಒಟದ ಸ್ಪರ್ಧೆ

## ಮೊಲ ಮತ್ತು ಆಮೆ

ಒಮ್ಮೆ ಒಂದು ಮೊಲ ಹಾಗೂ ಆಮೆಯ ನಡುವೆ ಪಂದ್ಯ ಬಿದ್ದಿತು.

ಯಾರು ಜೋರಾಗಿ ಓಡುವವರು? - ಎಂದು ಈ ಸ್ಪರ್ಧೆಯಲ್ಲಿ ತೀರ್ಮಾನ ಆಗಬೇಕಿತ್ತು.

ತನಗೇ ಬಹುಮಾನ ಗಟ್ಟಿ! ಎಂದು ಮೊಲ ಬೀಗುತ್ತಿತ್ತು. 'ಈ ಆಮೆಯ ಜೊತೆ ಓಡುವುದು ಏನು ಮಹಾ!' ಎಂದು ಕೊಂಡಿತು. ಜಂಭದ ಮೊಲ ಪಂದ್ಯದ ಬಗ್ಗೆ ಇಷ್ಟು ತಲೆ ಕೆಡಿಸಿಕೊಳ್ಳಲಿಲ್ಲ. ಹಾಯಾಗಿ ಮರದ ಬುಡದಲ್ಲಿ ಮಲಗಿ ನಿದ್ರಿಸಿತು.

ಆಮೆಗೆ ತಾನು ನಿಧಾನ ಎನ್ನುವುದು ಚೆನ್ನಾಗಿ ಗೊತ್ತಿತ್ತು. ಆದ್ದರಿಂಡ ಮಲಗಿದ್ದ ಸೋಮಾರಿ ಮೊಲವನ್ನು ದಾಟಿ, ಪಂದ್ಯ ಗೆದ್ದೇ ಬಿಟ್ಟಿತು!

ನೀತಿ :- ಸೋಮಾರಿಗೆ ದೊರಕದ ಫಲ ಶ್ರಮ ಜೀವಿಗೆ ದೊರಕುತ್ತದೆ.

## ಕಾಗೆಯ ಜಾಣತನ



ಉರಿಯುವ ಬೇಸಿಗೆಯ ಒಂದು ಮಧ್ಯಾಹ್ನ ಕಾಗೆಯೊಂದಕ್ಕೆ ವಿಪರೀತ ಬಾಯಾರಿಕೆಯಾಯಿತು. ಎಲ್ಲಿ ನೋಡಿದರೂ ಒಂದು ಹನಿ ನೀರು ಸಿಗಲಿಲ್ಲ.

ಹಠಾತ್ತನೆ ಕಾಗೆಯ ಕಣ್ಣು ಒಂದು ಹೂಜಿಯ ಮೇಲೆ ಬಿತ್ತು. ನೋಡುತ್ತದೆ! ಅದರ ತಳದಲ್ಲಿ ಒಂದಿಷ್ಟು ನೀರಿದೆ! ಬಾಯಿಗೆ ಸಿಗುವಂತೆ ಇಲ್ಲ.

ಕಾಗೆ ಸರ್ರನೆ ಹಾರಿತು. ಸಣ್ಣ ಸಣ್ಣ ಕಲ್ಲು ತಂದು ಹೂಜಿಗೆ ಹಾಕಿತು. ನೀರು ಮೇಲೆ ಬಂದಿತು. ಕಾಗೆ ಹೊಟ್ಟೆ ತುಂಬಾ ಕುಡಿದು ಹಾರಿ ಹೋಯಿತು.

ನೀತಿ :- ೧. ಕಷ್ಟ ಪಟ್ಟರೆ ಫಲವುಂಟು

೨. ಜಾಣ್ಮೆಯಿದ್ದರೆ ಏನನ್ನಾದರೂ ಸಾಧಿಸಬಹುದು.

## ಚಿನ್ನದ ಮೊಟ್ಟೆಯ ಬಾತುಕೋಳಿ

ಒಬ್ಬ ರೈತನಿದ್ದ. ಅವನು ಒಂದು ಬಾತುಕೋಳಿ ಸಾಕಿದ್ದ. ಅದು ಬೆಳೆದು ದೊಡ್ಡದಾಯಿತು. ಅವನ ಅದೃಷ್ಟಕ್ಕೆ ದಿನಾ ಒಂದು ಚಿನ್ನದ ಮೊಟ್ಟೆ ಇಡತೊಡಗಿತು.

ಅವನಿಗೆ ಒಂದು ಕೆಟ್ಟ ಆಲೋಚನೆ ಬಂತು. ದಿನಾ ಒಂದು ಮೊಟ್ಟೆ ಮಾರಿ ಜೀವಿಸುವುದು ಬೇಸರ ಅನಿಸಿತು. ಬಾತುಕೋಳಿಯ ಹೊಟ್ಟೆ ಕೊಯ್ದರೆ, ಎಲ್ಲಾ ಮೊಟ್ಟೆ ಒಟ್ಟಿಗೇ ಸಿಗುತ್ತದೆ ಎನಿಸಿತು.

ಕೊಯ್ದು ನೋಡುತ್ತಾನೆ! ಅಲ್ಲೇನಿದೆ? ಮಾಂಸ ಕರುಳು ಬಿಟ್ಟು.

ಕೋಳಿಯೂ ಹೋಯಿತು. ಬಂಗಾರದ ಮೊಟ್ಟೆಯೂ ಹೋಯಿತು.

ನೀತಿ :- ಅತಿ ಆಸೆಯಿಂದ ಕೇಡು ತಪ್ಪಿದ್ದಲ್ಲ.

# ಹೊಟ್ಟೆಕಿಚ್ಚಿನಿಂದ, ದುರಾಸೆಯಿಂದ ಇನ್ನೊಬ್ಬರನ್ನು ಅನುಕರಿಸಿದರೆ ಲಾಭವಿಲ್ಲ ಎಂದು ಹೇಳುವ ಕತೆಗಳು

## ಕುರಿ ವೇಷದ ತೋಳ

ಒಂದು ತೋಳಕ್ಕೆ ಬಹಳ ಹಸಿವಾಗಿತ್ತು. ಕುರಿಯ ತುಪ್ಪಳ ಹೊದ್ದುಕೊಂಡು ಮೆಲ್ಲಗೆ ಕುರಿಮಂದೆ ಸೇರಿತು.

ಕುರುಬ ಸಂಜೆ ಎಲ್ಲಾ ಕುರಿಗಳನ್ನೂ ದೊಡ್ಡಿಗೆ ತುಂಬಿದ. ಬೆಳಗಿನಿಂದ ಅವನಿಗೂ ದಣಿವಾಗಿತ್ತು. ಒಂದು ಕುರಿ ಕತ್ತರಿಸಿ ತಿನ್ನಬೇಕೆನಿಸಿತು. ಸರಿ, ಹಿಡಿದು ಕೊಯ್ದೇ ಬಿಟ್ಟ! ಯಾರನ್ನು?

ಕುರಿಯ ಚರ್ಮ ಹೊದ್ದಿದ್ದ ತೋಳವನ್ನು !

## ಹದ್ದು ಹಾಗೂ ಕಾಗೆ

ಒಂದು ಹದ್ದು ಬಂಡೆಯ ಮೇಲಿಂದ ಹಾರಿಬಂದು ಕುರಿಮರಿಯನ್ನು ಹಿಡಿದುಕೊಂಡಿತು.

ಇದನ್ನು ಒಂದು ಕಾಗೆ ನೋಡಿತು. ಅದಕ್ಕೆ ಹದ್ದಿನ ರೆಕ್ಕೆಗಳು ಮೇಲೆ ಹೊಟ್ಟೆಕಿಚ್ಚು ಬಂತು. ತಾನೂ ಸುಯ್ಯನೆ ಮೇಲಿಂದ ಹಾರಿ ಇನ್ನೊಂದು ಕುರಿಮರಿಯ ಹಿಂಬಾಗಕ್ಕೆ ರೆಕ್ಕೆ ಬೀಸಿತು.

ಅದರ ಕಾಲುಗಳು ಕುರಿಯ ತುಪ್ಪಳದಲ್ಲಿ ಸಿಕ್ಕಿ ಹಾಕಿಕೊಂಡಿತು. ಎಷ್ಟೇ ಕಷ್ಟಪಟ್ಟರೂ ಅದಕ್ಕೆ ರೆಕ್ಕೆ ಬಿಡಿಸಿಕೊಳ್ಳಲಾಗಲಿಲ್ಲ.

ಕುರುಬ ಬಂದ. ಕಾಗೆಯ ರೆಕ್ಕೆಪುಕ್ಕ ಕತ್ತರಿಸಿ ಕುರಿಯನ್ನು ಒಯ್ದ. ಕಾಗೆ ತೆವಳುತ್ತಾ ಅಲ್ಲೇ ಬಿದ್ದಿತು.

## ಕೋತಿ ಹಾಗೂ ಒಂಟೆ

ಒಮ್ಮೆ ಕಾಡಿನ ಪ್ರಾಣಿಗಳೆಲ್ಲಾ ಒಂದು ಔತಣ ಕೂಟ ಏರ್ಪಡಿಸಿದವು.

ಔತಣದ ನಂತರ ಕೋತಿ ತನ್ನ ಮಂಗಾಟದ ನರ್ತನದಿಂದ ಎಲ್ಲರನ್ನೂ ರಂಜಿಸಿತು.

ಅಲ್ಲಿದ್ದ ಒಂಟೆಗೆ ಇದನ್ನು ನೋಡಿ ಹೊಟ್ಟೆಕಿಚ್ಚು ಬಂತು. ತಾನೂ ಕೋತಿಯಂತೆ ಕುಣಿಯಲು ಆರಂಭಿಸಿತು.

ಅದರ ವಿಕಾರ ಕುಣಿತ ನೋಡಲಾರದ ಪ್ರಾಣಿಗಳು ಒಂಟೆಯನ್ನು ಹೊರಗಟ್ಟಿದವು.

**ಸಿಂಹದ ಚರ್ಮ ಹೊದ್ದ ಕತ್ತೆ**

ಒಂದು ಕತ್ತೆಗೆ ಹೇಗೋ ಏನೋ ಸಿಂಹದ ಚರ್ಮ ಸಿಕ್ಕಿತು. ಅದನ್ನು ಹೊದ್ದು ಕೊಂಡ ಅದು ತಾನೇ ಸಿಂಹ ಎಂಬಂತೆ ಆಡಿತು.

ಎಲ್ಲರೂ ಇದನ್ನು ಸಿಂಹವೆಂದೇ ನಂಬಿದರು. ಹೆದರಿದರು.

ಕತ್ತೆಯ ದುರದೃಷ್ಟಕ್ಕೆ ಬೀಸಿದ ಬಿರುಗಾಳಿ ಅದರ ಸಿಂಹದ ಚರ್ಮವನ್ನು ಕಿತ್ತು ಹಾಕಿತು.

ಕತ್ತೆಯ ಬಣ್ಣ ಬಯಲಾಯಿತು. ಎಲ್ಲರೂ ಅದನ್ನು ಚೆನ್ನಾಗಿ ಹೊಡೆದರು.

**ಕುದುರೆ ಹಾಗೂ ಹದ್ದು**

ಮೊದಮೊದಲು ಹದ್ದುಗಳೂ ಹಂಸದ ಹಾಗೆ ಹಾಡುತ್ತಿದ್ದವು. ಒಮ್ಮೆ ಒಂದು ಹದ್ದು ಕುದುರೆ ಕೆನೆಯುವುದನ್ನು ಕೇಳಿಸಿಕೊಂಡಿತು. ತನಗೂ ಹಾಗೇ ಕೆನೆಯಬೇಕೆನಿಸಿತು.

ಸರಿ, ದಿನಾಲೂ ಕೆನೆಯುವುದನ್ನು ಅಭ್ಯಾಸ ಮಾಡತೊಡಗಿತು. ಆದರೂ ಕೆನೆಯುವುದನ್ನು ಕಲಿಯಲಿಲ್ಲ. ಹಾಡುವುದನ್ನು ಮರೆತಿತು. ವಿಚಿತ್ರ ಗೊಗ್ಗರು ದನಿ ಅದರ ಗಂಟಲಿನಿಂದ ಬರತೊಡಗಿತು.

**ಹೊಟ್ಟೆಯೊಡದು ಸತ್ತ ಕಪ್ಪೆ**

ಒಂದು ಕೆರೆ. ಅದರಲ್ಲಿ ಬಹಳಷ್ಟು ಕಪ್ಪೆಗಳು ಇದ್ದವು. ಒಂದು ಎತ್ತು ಆ ಕೆರೆಯ ಬದಿಯಲ್ಲಿ ಮೇಯುತ್ತಿತ್ತು.

ಒಂದು ಕಪ್ಪೆ ಆ ಎತ್ತನ್ನು ನೋಡಿ 'ಅಬ್ಬಾ! ಎಷ್ಟು ದೊಡ್ಡದಾಗಿದೆ' ಎಂದು ಕೊಂಡಿತು. ತಾನೂ ಹಾಗೆ ಆಗುವ ಆಸೆ ಅದಕ್ಕೆ ಹುಟ್ಟಿತು.

ಹೊಟ್ಟೆಯೊಳಗೆ ಜೋರಾಗಿ ಗಾಳಿ ಎಳೆದುಕೊಂಡ ಆ ಕಪ್ಪೆ ತನ್ನ ಮಕ್ಕಳನ್ನು ಕರೆದು ಹೇಳಿ, 'ನಾನು ಆ ಪ್ರಾಣಿಯಷ್ಟು ದೊಡ್ಡದಾಗಿಲ್ಲವೇ?' ಎಂದು ಕೇಳಿತು.

ಮಕ್ಕಳು ತಾನೆ? ಸುಳ್ಳು ಹೇಗೆ ಹೇಳಿಯಾವು?

'ಇಲ್ಲ' ಎಂದು ಬಿಟ್ಟವು.

ಈ ಕಪ್ಪೆ ತಿರುಗಿ ಗಾಳಿ ಕುಡಿದು, ಹೊಟ್ಟೆ ಉಬ್ಬಿಸಿಕೊಂಡು, 'ಹೇಳಿ ಈಗ ಯಾರು ದೊಡ್ಡವರು?' ಎಂದಿತು.

'ಅದೇ' ಎಂದು ಮಕ್ಕಳು ಉತ್ತರಿಸಿದವು. ಈ ಕಪ್ಪೆಗೆ ವಿಪರೀತ ಕೋಪ ಬಂತು. ಇನ್ನೂ ಜೋರಾಗಿ, ಮತ್ತು ಜೋರಾಗಿ ಗಾಳಿ ಎಳೆ ಎಳೆದು ಕೊಂಡು, ಹೊಟ್ಟೆ ಒಡೆದು ಸತ್ತೇ ಹೋಯಿತು.

## ಸ್ವಭಾವದಿಂದ ಕೆಟ್ಟವರಾದವರು ಉಪಕಾರಕ್ಕೆ ಯೋಗ್ಯರಲ್ಲ ಎಂದು ತಿಳಿಸುವ ಕತೆಗಳು

### ಕೊಕ್ಕರೆ ಹಾಗೂ ತೋಳ

ಒಂದು ತೋಳ ಮಾಂಸ ತಿನ್ನುವ ಭರದಲ್ಲಿ ಮೂಳೆಯನ್ನೂ ನುಂಗಿ ಬಿಟ್ಟಿತು. ಆ ಮೂಳೆ ಗಂಟಲಲ್ಲಿ ಸಿಕ್ಕಿ ಹಾಕಿಕೊಂಡಿತು.

ಹತ್ತಿರದಲ್ಲೇ ಇದ್ದ ಕೊಕ್ಕರೆ ತೋಳದ ಅವಸ್ಥೆ ನೋಡಿ ಅದಕ್ಕೆ ಪಾಪ! ಎನಿಸಿತು. ತೋಳನೂ ಕೊಕ್ಕರೆಯನ್ನು ನೋಡಿತು. 'ದಯವಿಟ್ಟು ಈ ಕಷ್ಟದಿಂದ ಪಾರು ಮಾಡು ಕೊಕ್ಕರೆ ಅಣ್ಣಾ, ಬಹುಮಾನ ಕೊಡುತ್ತೀನಿ' ಎಂದಿತು.



ಮೊದಲೇ ಮರುಕ ಹುಟ್ಟಿದ್ದ ಕೊಕ್ಕರೆ ಮೂಳೆ ತೆಗೆಯಲು ಮುಂದಾಯಿತು.

ತನ್ನ ಇಕ್ಕಳದಂಥಾ ಕೊಕ್ಕಿನಿಂದ ಮೂಳೆಯನ್ನು ಹೊರಗೆಳೆಯಿತು. ಹೊರಗೆ ಎಳೆದದ್ದೇ ಕೊಕ್ಕರೇ ತೋಳವನ್ನು ಕೇಳಿತು -

'ಎಲ್ಲಿ ಬಹುಮಾನ ತೋಳಣ್ಣಾ?'

'ಆ್ಹಂ! ಬಹುಮಾನವೇ? 'ನಿನ್ನ ಕೊಕ್ಕನ್ನು ನನ್ನ ಬಾಯಿಯಲ್ಲಿ ಹಾಕಿದರೂ ನಾನು ಸುಮ್ಮನಿರಲಿಲ್ಲವೇ? ಇದಕ್ಕಿಂತ ಎಂಥ ಬಹುಮಾನ ನಿನಗೆ ಕೊಡುವುದು?' ಎಂದು ಉದ್ಧಟ ತೋಳ ಉತ್ತರಿಸಿತು.

**ಹಾವೂ ಹಾಗೂ ರೈತ**

ಚಳಿಗಾಲದ ಒಂದು ದಿನ. ಒಂದು ಹಾವು ಮಂಜಿನಲ್ಲಿ ಸೆಟೆದುಕೊಂಡು ಬಿದ್ದಿತ್ತು.

ಚಳಿಯಿಂದ ಮರಗಟ್ಟಿದ್ದ ಅದನ್ನು ಒಬ್ಬ ರೈತ ನೋಡಿದ. ಎತ್ತಿ, ಎದೆಗೆ ಒತ್ತಿಕೊಂಡು ಶಾಖಕೊಟ್ಟ.

ಶಾಖದಿಂದ ಎಚ್ಚೆತ್ತ ಹಾವು ಕೂಡಲೇ ಅವನನ್ನು ಕಡಿಯಿತು.

## ಜಾಣರಾದವರು ನಯವಂಚಕನ ಸವಿಮಾತಿಗೆ ಮರುಳಾಗರು ಎಂದು ತಿಳಿಸುವ ಕತೆಗಳು

### ಕುರಿ ಹಾಗೂ ತೋಳ

ಒಂದು ಪುಟ್ಟ ಕುರಿಮರಿಯನ್ನು ಒಮ್ಮೆ ಒಂದು ತೋಳ ಬೆನ್ನು ಹತ್ತಿತು.

ಕುರಿ ಮರಿ ಒಂದು ದೇವಸ್ಥಾನದೊಳಗೆ ಹೊಕ್ಕಿತು.

ಇದನ್ನು ಕಂಡ ತೋಳ 'ಬಾ ಕುರಿ ಮರಿ' ಹೊರಗೆ ಬಾ ಇಲ್ಲದಿದ್ದರೆ ಪೂಜಾರಿ ನಿನ್ನನ್ನು ಕೊಲ್ಲುತ್ತಾನೆ!' ಎಂದಿತು

ಅದಕ್ಕೆ ಕುರಿಮರಿ 'ಆಗಲಿ ಬಿಡು. ನಿನ್ನ ಕೈಲಿ ಸಿಕ್ಕು ಸಾಯುವುದಕ್ಕಿಂತ ದೇವರಿಗೆ ಬಲಿಯಾಗುವುದೇ ವಾಸಿ!' ಎಂದಿತು.



### ಬೆಕ್ಕು ಹಾಗೂ ಕೋಳಿ

ಒಂದು ಬೆಕ್ಕಿಗೆ ಅದು ಹೇಗೋ ಆ ಗೂಡಿನ ಕೋಳಿಗಳಿಗೆ ಖಾಯಿಲೆ ಎಂದು ತಿಳಿಯಿತು.

ವೈದ್ಯನಂತೆ ವೇಷ ಹಾಕಿದ ಬೆಕ್ಕು, ಕೋಳಿಗಳ ಗೂಡಿನ ಬಳಿ ಬಂತು. 'ನನ್ನ ಪ್ರೀತಿಯ ಕೋಳಿಗಳೇ, ನಿಮಗೆ ಖಾಯಿಲೆ ಎಂದು ತಿಳಿದು ಮದ್ದು ನೀಡಲು ಬಂದಿದ್ದೇನೆ. ಬಾಗಿಲು ತೆಗೆಯಿರಿ' ಎಂದಿತು.



ಆಗ ಅಲ್ಲಿದ್ದ ಕೋಳಿಯೊಂದು 'ನೀನು ಇಲ್ಲಿಂದ ಹೋದರೆ ನಮಗೆ ಅದೇ ಔಷಧಿ' ಎಂದು ಅಲ್ಲಿಂದ ಬೆಕ್ಕನ್ನು ಅಟ್ಟಿತು!

## ನರಿ ಹಾಗೂ ಹುಂಜ

ಒಂದು ಎತ್ತರದ ಗಿಡದ ಮೇಲೆ ಒಂದು ಹುಂಜ ಕುಳಿತು ಕ್ಕೊ...ಕ್ಕೊ...ಕ್ಕೊ ಎಂದು ಕೂಗುತ್ತಿತ್ತು. ನರಿಗೆ ಬಾಯಲ್ಲಿ ನೀರು ಬಂತು.

'ಓಹೊಹೋ! ಹುಂಜಣ್ಣಾ, ಎಷ್ಟು ದಿನ ಆಯ್ತು ನಿನ್ನ ನೋಡಿ ಬಾ ಕೆಳಗೆ ಮಾತಾಡೋಣ' ಎಂದಿತು.

'ಹೇಗೆ ಬರಲಪ್ಪಾ? ಕ್ರೂರ ಪ್ರಾಣಿಗಳು ನನ್ನನ್ನು ಸುಮ್ಮನೆ ಬಿಟ್ಟಾವೆಯೇ?' ಎಂದಿತು.

'ಅಯ್ಯೋ, ಕಾಡಿನ ಪ್ರಾಣಿಗಳು ಮಾಡಿಕೊಂಡ ಒಪ್ಪಂದ ನಿನಗೆ ಗೊತ್ತಿಲ್ಲವೇ?''ಇಲ್ಲಿನ ಪಶುಪಕ್ಷಿಗಳು, ಯಾರು ಯಾರನ್ನೂ ತಿನ್ನಬಾರದು'' ಅಂತ' - ಎಂದಿತು.

'ಹೌದೇ? ನನಗೆ ಗೊತ್ತಿರಲೇ ಇಲ್ಲ. ದೂರದಲ್ಲಿ ಬೇಟೆನಾಯಿ ಜೊತೆ ಬೇಟೆಗಾರರು ಬರುತ್ತಿದ್ದ ಹಾಗಿತ್ತು ನೋಡುತ್ತಾ ಕುಳಿತಿದ್ದೆ. ತಡಿ ಈಗ ಇಳಿದು ಬರುವೆ' ಎಂದಿತು ಹುಂಜ.

ಕೂಡಲೇ ನರಿ ಅಲ್ಲಿಂದ ಪರಾರಿ!

## ಜಂಭಗಾರರನ್ನು ಗೇಲಿ ಮಾಡಿರುವ ಕತೆಗಳು

### ಯಾತ್ರಿಕನ ಬಡಾಯಿ

ಒಬ್ಬ ಯಾತ್ರಿಕನಿದ್ದ. ಅವನು ಅನೇಕ ದೇಶಗಳನ್ನೂ ಸುತ್ತಿ ಬಂದಿದ್ದ. ಬಂದವನು ತನ್ನ ಊರಿನ ಜನಗಳು ಮುಂದೆ ಜಂಭ ಹೊಡೆಯಲು ಆರಂಭಿಸಿದ.

'ಆಹ್! ಆ ಬೆಟ್ಟಗಳ ನಾಡಿನಲ್ಲಿ ನಾನು ಒಂದು ಬೆಟ್ಟದ ತುದಿಯಿಂದ ಇನ್ನೊಂದು ಬೆಟ್ಟದ ತುದಿಗೆ ಹೇಗೆ ಹಾರುತ್ತಿದ್ದೆ ಗೊತ್ತೇ?' ಎಂದ.

ಇದನ್ನು ಕೇಳಿಸಿಕೊಂಡ ಒಬ್ಬ ಹೇಳಿದ 'ಹೌದೇ? ಹಾಗಾದರೆ ನಮ್ಮ ಬೀದಿಯ ಒಂದು ಮನೆಯಿಂದ ಇನ್ನೊಂದು ಮನೆಗೆ ಹಾರು ನೋಡುವ. ಮಧ್ಯೆ ಇರುವುದು ಪುಟ್ಟ ಓಣಿ ತಾನೇ?'

ಬಡಾಯಿಗಾರ ಮುಂದಿನ ನಿಮಿಷದಲ್ಲಿ ಅಲ್ಲಿದ್ದರೆ ಕೇಳಿ.

### ಕತ್ತೆ ಹಾಗೂ ದೇವರು

ಒಂದು ಕತ್ತೆಯ ಬೆನ್ನ ಮೇಲೆ ದೊಡ್ಡದೊಂದು ದೇವರ ವಿಗ್ರಹವಿಟ್ಟು ನಗರಕ್ಕೆ ಸಾಗಿಸುತ್ತಿದ್ದರು.

ದಾರಿಹೋಕರೆಲ್ಲಾ ಕತ್ತೆಯ ಬೆನ್ನಿನ ದೇವರಿಗೆ ಕೈ ಮುಗಿಯುತ್ತಿದ್ದರು. ಈ ಕತ್ತೆ ಅವರೆಲ್ಲಾ ತನಗೇ ನಮಸ್ಕಾರ ಮಾಡುತ್ತಿದ್ದಾರೆ ಎಂದು ತಿಳಿಯಿತು.'ಹಾಗಾದರೆ ತಾನೇಕೆ ಈ ದರಿದ್ರ ಭಾರವನ್ನು ಹೊರಬೇಕು?' ಎಂದು ಅಲ್ಲೇ ನಿಂತುಬಿಟ್ಟಿತು.

ಇದರ ಮೊಂಡಾಟ ನೋಡಿದ ಅದರ ಯಜಮಾನ ಅದಕ್ಕೆ ಚೆನ್ನಾಗಿ ಹೊಡೆದು, ಅದರ ಬೆನ್ನಿನ ಮೇಲಿನ ವಿಗ್ರಹ ತೆಗೆದು ಬೇರೊಂದು ಕತ್ತೆಯ ಮೇಲೆ ಹಾಕಿಕೊಂಡು ಹೋದ.

ಈ ಕತ್ತೆ ಕೇಳುವವರಿಲ್ಲದೆ ಅಲ್ಲೇ ನಿಂತಿತ್ತು!

## ರಾಜ, ಅಧಿಕಾರಿ ಇವರನ್ನು ಕುರಿತ ಕಥೆಗಳು

### ಪ್ರಜೆಗೆ ತಕ್ಕ ರಾಜ

ಒಂದು ಕೊಳದಲ್ಲಿದ್ದ ಕಪ್ಪೆಗಳಿಗೆ ತಮಗೊಬ್ಬ ರಾಜ ಬೇಕೆನಿಸಿತು. ದೇವರಲ್ಲಿ ರಾಜನಿಗಾಗಿ ಮೊರೆ ಇಟ್ಟವು.

ಕರುಣಾಶಾಲಿ ದೇವರು ಬಂದು ಮರದ ದಿಮ್ಮಿಯನ್ನು ಕೊಳಕ್ಕೆ ಎಸೆದ.

ಮೊದಮೊದಲು ಆ ದಪ್ಪ ದಿಮ್ಮಿಯನ್ನು ನೋಡಿ ಕಪ್ಪೆಗಳು ಹೆದರಿ ಕೊಳದ ತಳ ಸೇರಿದವು. ಆಮೇಲೆ ಆ ದಿಮ್ಮಿಯ ಈ ಸಲಿಗೆ ಇಷ್ಟವಾಗಲಿಲ್ಲ.

''ಇವನೆಂಥಾ ರಾಜ!'' ಎಂದು ಕೊಂಡವು.

ಮತ್ತೆ ರಾಜನಿಗಾಗಿ ದೇವರ ಮೊರೆ ಹೊಕ್ಕವು.

ದೇವರಿಗೆ ವಿಪರೀತ ಕೋಪ ಬಂತು. ಈ ಬಾರಿ ಬಂದು ನೀರು ಹಾವನ್ನು ಕಳುಹಿಸಿದ

ಆ ಹಾವು ಕಪ್ಪೆಗಳನ್ನೆಲ್ಲಾ ನುಂಗಿ ನೊಣೆಯಿತು.

ಈಸೋಪ ಪೆಸಿಸ್ಟ್ರಾನ ಕಾಲದಲ್ಲಿ ಅಥೆನ್ಸಿಗೆ ಭೇಟಿ ಕೊಟ್ಟಿರಬೇಕು. ಬಹುಶಃ ಆಗಲೇ ಈ ಕಥೆ ಬರೆದಿರಬೇಕು ಎಂದು ಹೇಳುತ್ತಾರೆ. 'ಇರುವ ರಾಜನಿಗಿಂತ ಬರುವ ರಾಜ ದುರುಳ' ಎಂಬ ವಿಚಾರ ಇಲ್ಲಿದೆ ಎನ್ನುತ್ತಾರೆ. ಕೆಲವರಿಗೆ, ಉದಾರಿ ರಾಜನಿಗಿಂತ ಸರ್ವಾಧಿಕಾರಿಯೇ ಸರಿ ಎಂದೂ ಈಸೋಪ ಇಲ್ಲಿ ಹೇಳಿರಬಹುದು.

**ಕತ್ತೆ ಹಾಗೂ ಸೈನಿಕರು**

ಒಬ್ಬ ಮುದುಕ ಮೈದಾನದಲ್ಲಿ ಕತ್ತೆ ಮೇಯಿಸುತ್ತಿದ್ದ. ಇದ್ದಕ್ಕಿದ್ದಂತೆ ಸೈನಿಕರ ದಾಳಿಯ ಸಪ್ಪಳ ಕೇಳಿತು.

ಅವನು ಕತ್ತೆಯನ್ನು ಕುರಿತು 'ಓಡು, ಓಡು. ಅವರು ನಮ್ಮನ್ನು ಹಿಡಿದು ಕೊಳ್ಳುತ್ತಾರೆ' ಎಂದು ಕೂಗಿದ.

ಕತ್ತೆ ಅಲುಗಾಡದೆ ತನ್ನ ಪಾಡಿಗೆ ತಾನು ಮೇಯುತ್ತಿತ್ತು.

'ಅಯ್ಯೋ, ಮೂರ್ಖ ಕತ್ತೆಯೇ, ಹೊಸ ಸೈನಿಕರ ಕೈಗೆ ಸಿಕ್ಕಿ ಹಾಳಾಗಿ ಹೋಗುತ್ತೀಯೆ!' ಎಂದು ಅರಚಿದ.

'ಹೊಸ ಸೈನಿಕರಾದರೇನು? ಹಳೆ ಸೈನಿಕರಾದರೇನು? ನನ್ನ ಭಾರ ಹೊರುವ ಕೆಲಸದಲ್ಲಿ ವ್ಯತ್ಯಾಸವಾಗುವುದೇ?' ಎಂದು ಕತ್ತೆ ಪ್ರಶ್ನಿಸಿತು.

ಮುದುಕ ಇಲ್ಲ ಎಂದ.

'ಹಾಗಾದರೆ ಯಾವ ಯಜಮಾನನಾದರೆ ನನಗೇನು? ನನ್ನ ಕೆಲಸ ನನಗೆ ಇದ್ದೇ ಇರುತ್ತದೆ' ಎಂದು ಕತ್ತೆ ಅಲ್ಲೇ ಮೇಯುತ್ತಾ ನಿಂತಿತು.

ಯಾವ ರಾಜನಾದರೂ ಜನಸಾಮಾನ್ಯರ ಪಾಡು ಒಂದೇ ಎಂಬ ವಿಚಾರವನ್ನು

ಈಸೋಪ ಇಲ್ಲಿ ಹೇಳಿದ್ದಾನೆ. 'ರಾಮನಿಗೆ ರಾಜ್ಯ ಬಂದರೆ ರಾಗಿ ಬೀಸೋದು ತಪ್ಪುವುದೆ?' ಎಂಬ ನಮ್ಮ ಗಾದೆಯನ್ನು ಇಲ್ಲಿ ನೆನಪಿಸಿಕೊಳ್ಳಬಹುದು.

### ನರಿ ಹಾಗೂ ಚಿಗಟ

ಲಂಚಗುಳಿ ಅಧಿಕಾರಿಗಳ ಬಗ್ಗೆ ಈಸೋಪನ ಒಂದು ಕಥೆ ಹೀಗಿದೆ.

ಒಂದು ನರಿಯ ಮೈಮೇಲೆ ಚಿಗಟಗಳು ಕೂತಿದ್ದವು. ಇದನ್ನು ನೋಡಿದ ಬೇಲಿಹಂದಿ 'ಅದನ್ನು ತೆಗೆಯಲೇ?' ಎಂದು ಕೇಳಿತು.

'ಬೇಡಾ, ಅವು ಅಲ್ಲೇ ಇರಲಿ. ಈಗಾಗಲೇ ಈ ಚಿಗಟಗಳು ರಕ್ತ ಹೀರಿ ಹೊಟ್ಟೆ ತುಂಬಿಸಿಕೊಂಡಿವೆ. ಇವನ್ನು ತೆಗೆದರೆ, ಹೊಸ ಚಿಗಟ ಇನ್ನೂ ಹೆಚ್ಚು ರಕ್ತ ಹೀರುತ್ತವೆ ಎಂದು ನರಿ ಉತ್ತರಿಸಿತು.'

ನೀತಿ :- ಎಲ್ಲರೂ ಲಂಚಗುಳಿಗಳೇ ಆದಾಗ ಆದಾಗ ಅಧಿಕಾರಿಗಳನ್ನು ಬದಲಾಯಿಸಿ ಪ್ರಯೋಜನವಿಲ್ಲ.

### ಅಂಗಾಂಗಗಳ ಮುಷ್ಕರ

ಪ್ರತ್ಯೇಕತೆಗಾಗಿ ಹಲವಾರು ರಾಜ್ಯಗಳು ಹೊಡೆದಾಡುತ್ತಿರುವ ಈ ಸಮಯದಲ್ಲಿ ರಾಜ್ಯ-ದೇಶಗಳ ಕಥೆ ಎಷ್ಟೊಂದು ಅರ್ಥಪೂರ್ಣ!

ಒಮ್ಮೆ ದೇಹದ ಎಲ್ಲಾ ಅಂಗಗಳೂ ಹೊಟ್ಟೆಯ ವಿರುದ್ಧ ಬಂಡೆದ್ದವು.

'ನಾವೆಲ್ಲಾ ಕಷ್ಟ ಪಟ್ಟು ದುಡಿದು ಈ ಹಾಳು ಹೊಟ್ಟೆಯನ್ನು ಏಕೆ ತುಂಬಿಸಬೇಕು?' ಎಂದು ತಮ್ಮ ತಮ್ಮಲ್ಲೇ ಮಾತಾಡಿಕೊಂಡವು.

ಸರಿ. ಕೈ ಆಹಾರವನ್ನು ತೆಗೆದುಕೊಳ್ಳಲಿಲ್ಲ. ಬಾಯಿ ಸ್ವೀಕರಿಸಲಿಲ್ಲ. ಹಲ್ಲು ಅಗಿಯಲಿಲ್ಲ.

ಹೀಗೇ, ಕೆಲವು ದಿನಗಳು ಕಳೆದವು.

ಕೈ, ಕಾಲುಗಳೆಲ್ಲಾ ಸೊರಗುತ್ತಾ ಬಂದವು.

ಆಗ ಹೊಟ್ಟೆ ಬುದ್ಧಿ ಹೇಳಿತು.'ನಾನು ನಿಮ್ಮಿಂದ ಬೆಳೆಯುತ್ತಿರುವುದಾಗಿ ನಿಮಗೆ ಕಾಣುತ್ತದೆ. ನಿಜ. ಆದರೆ, ನಾನು ಇಂಜಿನ್‌ನಂತೆ ಕೆಲಸ ಮಾಡದಿದ್ದರೆ ನೀವೆಲ್ಲಾ ಎಲ್ಲಿರುತ್ತೀರಿ?'

ಎಲ್ಲಾ ಅಂಗಗಳೂ ತಲೆ ತಗ್ಗಿಸಿ ಕೆಲಸ ಆರಂಭಿಸಿದವು. ಜೀವ ಉಳಿಸಿಕೊಂಡವು.

## ಹದ್ದು, ಗಿಡಗ ಹಾಗೂ ಪಾರಿವಾಳ

ಒಂದು ಕಾಡಿನಲ್ಲಿ ಒಂದು ವಿಶಾಲವಾದ ಗೂಡು ಕಟ್ಟಿಕೊಂಡು ಪಾರಿವಾಳಗಳು ಸುಖವಾಗಿ ಇದ್ದವು.

ಒಂದು ದಿನ, ಗೂಡಿನಿಂದ ಕತ್ತೆತ್ತಿ ನೋಡುತ್ತವೆ! ಹದ್ದು ಮೇಲೆ ಹಾರಾಡುತ್ತಿದೆ. ಅವು ಗೂಡಿನಿಂದ ಹೊರಗೇ ಬರದೆ ಕುಳಿತವು. ಎಷ್ಟು ದಿನ ಹೀಗೆ ನಡೆದೀತು?

ಒಂದು ದಿನ ಗಿಡುಗ ಅಲ್ಲೇ ಹಾರುತ್ತಿರುವುದನ್ನು ಪಾರಿವಾಳಗಳು ಕಂಡವು. 'ಗಿಡುಗಣ್ಣಾ, ನಮ್ಮನ್ನು ಕಾಪಾಡು. ಈ ಹಾಳು ಹದ್ದು ನಮ್ಮನ್ನು ಹೊಂಚು ಹಾಕುತ್ತಿದೆ' ಎಂದು ಬೇಡಿಕೊಂಡವು.

ಗಿಡುಗಕ್ಕೆ ತುಂಬಾ ಖುಷಿಯಾಯಿತು. 'ನಾನಿದ್ದೇನೆ! ಯಾಕೆ ಯೋಚಿಸುತ್ತೀರಿ? ಎಲ್ಲಿ ಆ ಮೂಲೆಯಲ್ಲಿ ನಿಮ್ಮ ಪಕ್ಕದಲ್ಲಿ ಕುಳಿತುಕೊಳ್ಳಲು ಒಂದಿಷ್ಟು ನಿಮ್ಮ ಗೂಡಲ್ಲಿ ಸ್ಥಳ ನೀಡಿ' ಎಂದು ಕೇಳಿತು.

ಪೆದ್ದು ಪಾರಿವಾಳಗಳು ತಮ್ಮ ಪಕ್ಕದಲ್ಲಿ ಸ್ಥಳ ಕೊಟ್ಟವು.



ಇಬ್ಬರ ಜಗಳ ಮೂರನೆಯವನಿಗೆ ಲಾಭ

ಪಾರಿವಾಳಗಳ ಗುಂಪೇ ಗಿಡುಗದ ಪಾಲಾಯಿತು.

ನೀತಿ :- ಒಬ್ಬ ಶತ್ರುವನ್ನು ಓಡಿಸಲು ಇನ್ನೊಬ್ಬ ಶತ್ರುವನ್ನು ಆಹ್ವಾನಿಸಿದರೆ ನಾಶ ತಪ್ಪಿದ್ದಲ್ಲ.

**ಸಿಂಹ ಹಾಗೂ ಕಾಡು ಹಂದಿ**

ಒಳಜಗಳದಿಂದ ಮೂರನೆಯವರಿಗೆ ಯಾವತ್ತಿಗೂ ಲಾಭ ಎಂಬ ನೀತಿಯನ್ನು ಈಸೋಪನ ಈ ಕಥೆ ಹೇಳುತ್ತದೆ.

ಒಂದು ಬಿರು ಬೇಸಿಗೆಯ ದಿನ ಒಂದು ಸಿಂಹ ಹಾಗೂ ಕಾಡುಹಂದಿ ನೀರು ಕುಡಿಯಲು ಬಂದು ಕೊಳದ ಬಳಿ ಬಂದವು.

'ನಾನು ಈ ಕಾಡಿನ ರಾಜ. ನಾನು ಮೊದಲು ನೀರು ಕುಡಿಯುವೆ' ಎಂದು ಸಿಂಹ ಗರ್ಜಿಸಿತು.

'ನೀನು ರಾಜನಾದರೆ ನನಗೇನು? ನನಗೆ ನಿನಗಿಂತ ಹೆಚ್ಚು ಬಾಯಾರಿಕೆ ಆಗಿದೆ. ನಾನು ಮೊದಲು ನೀರು ಕುಡಿಯುವೆ' ಎಂದು ಹಂದಿ ಕೂಗಿತು.

'ಎಲಾ ಹಂದಿ!' ಎಂದು ಸಿಂಹ ಪಂಜವೆತ್ತಿ ಹಂದಿಯ ಮೇಲೆ ಅಪ್ಪಳಿಸಿತು. ಹಂದಿಯೇನು ಕಡಿಮೆ? ಅದೂ ತನ್ನ ಕೋರೆಯಿಂದ ತಿವಿಯಿತು.

ಜಗಳ ಅತಿರೇಕಕ್ಕೆ ಹೋಯಿತು. ಏಕೋ ಏನೋ ಎರಡರ ದೃಷ್ಟಿಯೂ ಆಕಾಶದತ್ತ ಬಿಟ್ಟಿತು. ರಣಹದ್ದುಗಳು ಹಾರಾಡುತ್ತಿದ್ದವು.

'ಇವೆರಡರಲ್ಲಿ ಯಾವುದು ಮೊದಲು ಸಾಯುತ್ತವೆ?' ಎಂದು ಅವು ಕಾಯುತ್ತಿದ್ದವು

'ಅಯ್ಯೋ! ಹೊಡೆದಾಡಿ ಸತ್ತು ಈ ರಣಹದ್ದುಗಳಿಗೆ ಆಹಾರ

ಆಗುವುದಕ್ಕಿಂತ ನಾವು ಸ್ನೇಹಿತರಾಗಿರೋಣ' ಎಂದು ಸಿಂಹ ಹೇಳಿತು. ಹಂದಿ ಒಪ್ಪಿತು.

ಎರಡೂ ಒಟ್ಟಿಗೆ ನೀರು ಕುಡಿದವು.

## ಸಿಂಹದ ಮಂತ್ರಿ ಮಂಡಲ

ವನರಾಜನಾದ ಸಿಂಹಕ್ಕೆ ಮೂವರು ಮಂತ್ರಿಗಳಿದ್ದರು. ಒಂದು ಟಗರು ಒಂದು ತೋಳ, ಇನ್ನೊಂದು ನರಿ. ಸಿಂಹ ಮುದಿಯಾಗಿತ್ತು. ಬೇಟೆಯಿಲ್ಲದೆ ಹಸಿದಿತ್ತು.

'ತುರ್ತು ಸಭೆಗೆ ಬನ್ನಿ' ಎಂದು ಮೂರು ಮಂತ್ರಿಗಳನ್ನು ಕರೆಸಿಕೊಂಡಿತು. ಸಿಂಹ ಮೊದಲು ಟಗರನ್ನು ಕೇಳಿತು.

'ಎಲೈ ಟಗರೇ, ನನ್ನ ಮುಖದಿಂದ ಏನಾದರೂ ವಾಸನೆ ಬರುತ್ತಿದೆಯೇ?'

ಮೂಸಿನೋಡಿದ ಟಗರು, 'ಹೌದು ಎಂದಿತು.'

'ಆ್ಞಂ, ನನ್ನ ಬಾಯಿ ವಾಸನೆಯೇ?' ಎಂದು ಪಂಜದಿಂದ ಒಂದೇ ಏಟಿಗೆ ಟಗರನ್ನು ಅಪ್ಪಳಿಸಿ ಕೊಂದಿತು.

'ಏ ತೋಳ ನೀನು ಹೇಳು. ನನ್ನ ಬಾಯಿ ವಾಸನೆಯೇ?' ಎಂದು ತೋಳನನ್ನು ಕೇಳಿತು.

ಕಣ್ಣ ಮುಂದೆಯೇ ಟಗರಿಗಾದ ಗತಿಯನ್ನು ಕಂಡಿದ್ದ ತೋಳ,

'ಛೇ, ಛೇ, ಯಾವ ವಾಸನೆಯೂ ಬರುತ್ತಿಲ್ಲ ಜೀಯಾ' ಎಂದಿತು.

'ಆ್ಞಂ, ಸುಳ್ಳು ಬೊಗಳುವೆಯಾ?' ಎಂದು ತೋಳವನ್ನೂ ಕೊಂದಿತು.

'ನೀನು ಹೇಳು'. ಎಂದಿತು ನರಿಗೆ

'ನನಗೆ ನೆಗಡಿಯಾಗಿದೆ ದೊರೆ. ಏನೂ ತಿಳಿಯುತ್ತಿಲ್ಲ' ಎಂದು ನರಿ ಅಲ್ಲಿಂದ ಓಡಿತು.

ನೀತಿ :- ದುಷ್ಟ ರಾಜನ ಆಶ್ರಯ ಅಪಾಯಕಾರಿ

ರಾಜನನ್ನು ಓಲೈಸಿ ಬಾಳುವುದು ಕಷ್ಟ ಎಂದು ನಮ್ಮ ಪಂಪನೂ ಹೇಳಿದ್ದಾನೆ.

## ಕುರಿತೋಳಗಳ ಒಪ್ಪಂದ

ಪ್ರಬಲನಾದ ಆಜನ್ಮ ವೈರಿಯೊಡನೆ ಒಪ್ಪಂದ ಅರ್ಥ ಹೀನ. ಈ ಹೊತ್ತಿಗೂ ಇದು ಸತ್ಯ. ಶಕ್ತ ದೇಶಗಳು ಚಿಕ್ಕ ದೇಶಗಳನ್ನು ಒಪ್ಪಂದದ ಹೆಸರಿನಲ್ಲಿ ವಂಚಿಸುತ್ತಲೇ ಇರುತ್ತವೆ.

ಈಸೋಪನಲ್ಲಿರುವ ಈ ಕಥೆ ಇದೇ ನೀತಿಯನ್ನು ಹೊಂದಿದೆ.

ಒಂದು ತೋಳ, ಕುರಿಗಳ ಮೇಲೆ ಎರಗುವುದಿಲ್ಲವೆಂದು ಒಪ್ಪಂದ ಮಾಡಿಕೊಂಡಿತು. ಕುರಿಗಳ ಕಾವಲು ಕಾಯುವ ನಾಯಿಗಳನ್ನು ದೂರ ನಿಲ್ಲಿಸಿತು.

ಕುರಿಗಳು ತಮ್ಮ ಮರಿಗಳನ್ನು ತೋಳದ ಕಾವಲಿಗೆ ಒಪ್ಪಿಸಿದವು. ತೋಳ ತನ್ನ ಮೂಲ ಬುದ್ಧಿಯನ್ನು ಬಿಡದೆ ಕುರಿಗಳನ್ನು ತಿನ್ನಲು ಸಮಯಕಾಯುತಿತ್ತು. ಪುಟ್ಟ ಮರಿಗಳು ಅಪ್ಪ, ಅಮ್ಮರನ್ನು ನೆನೆದು ಅಳಹತ್ತಿದವು.

ಎಲೈ ಕುರಿಗಳೇ, ನೀವು ಮಕ್ಕಳನ್ನು ಸರಿಯಾಗಿ ಬೆಳಸಿಲ್ಲ. ಆದ್ದರಿಂದ ಯುದ್ಧಕ್ಕೆ ನಿಲ್ಲಿ. ಎಂದು ಹೇಳಿ ಕುರಿಗಳನ್ನು ಮುಗಿಸಿದವು.

ನಾಯಿಗಳು ಕಾವಲು ಇಲ್ಲದ ಕುರಿಗಳ ಗುಂಪು ತಮ್ಮ ಒಪ್ಪಂದದ ಉರುಲಿಗೆ ಬಲಿಯಾದವು.

# ಮೋಸಗಾರರು ಹೇಳುವ ನ್ಯಾಯ-ನ್ಯಾಯವಲ್ಲ ಎಂದು ತೋರಿಸುವ ಕತೆಗಳು

## ಜೂಲುನಾಯಿ ಹಾಗೂ ಆಡು

ಒಂದು ಆಡಿನ ಹಿಂದೆ ಬಿದ್ದ ಜೂಲುನಾಯಿಯು ' ಹಿಂದೆ ನಾನು ಮಾಡಿದ ಉಪಕಾರದ ಸಾಲ ತೀರಿಸು' ಎಂದು ಪೀಡಿಸತೊಡಗಿತು.

ಅಂತಹ ಉಪಕಾರ ಯೂವುದೂ ಆಡಿನ ನೆನಪಿಗೆ ಬರಲಿಲ್ಲ.

ಆಡು ಪರಿಸರಿಯಾಗಿ ನಾಯಿಯನ್ನು ಕೇಳಿಕೊಂಡಿತು. ನಾಯಿ ಬಿಡಲಿಲ್ಲ.

ಹದ್ದು ಹಾಗೂ ತೋಳದ ಪಂಚಾಯಿತಿಗೆ ಆಡನ್ನು ಒಪ್ಪಿಸಿತು.

' ನಾಯಿ, ಪ್ರಾಮಾಣಿಕ ಹಾಗೂ ಸಾತ್ವಿಕ ಆಗಿರುವುದರಿಂದ ಆಡೇ ಅಪರಾಧಿ' ಎಂದು ತೀರ್ಪು ಕೊಂಡವು.

ನಾಯಿ ಆಡನ್ನು ಕೊಂದಿತು. ಮೂವರೂ ಅದನ್ನು ಹಂಚಿಕೊಂಡುತಿಂದರು.

ನೀತಿ : ಮೋಸಗಾರರ ಕೈಯಲ್ಲಿ ಸಾತ್ವಿಕರ ನ್ಯಾಯ ಸಾಯುತ್ತದೆ.

## ಎತ್ತು ಹಾಗೂ ರೈತ

' ಸ್ವಾಮಿ, ಸ್ವಾಮಿ ನನ್ನ ಸೊಕ್ಕಿದ ಎತ್ತು ನಿಮ್ಮ ಎತ್ತನ್ನು 'ಗಾಯಗೊಳಿಸಿದೆ'

ಎಂದು ಓಡುತ್ತಾ ಬಂದ ರೈತನೊಬ್ಬ ಪಂಚಾಯತಿಯ ಮುಖಂಡನಿಗೆ ಹೇಳಿದ. 'ಹೌದೇ, ಕಟ್ಟಿ ಹಾಕು ಆ ನಿನ್ನ ದುಷ್ಟ ಎತ್ತನ್ನು' ಎಂದು ತಾಕೀತು ಮಾಡಿದ.

'ಅಯ್ಯೋ ಅಲ್ಲ ಸ್ವಾಮಿ. ನಿಮ್ಮ ಸೊಕ್ಕಿದ ಎತ್ತು ನನ್ನ ಎತ್ತನ್ನು ಗಾಯ ಮಾಡಿದೆ ಎಂದು ರೈತ ತಿದ್ದಿಕೊಂಡು ಹೇಳಿದ.'

'ಓಹೋ! ಹಾಗೋ? ಗಾಯಗೊಳಿಸಿದ್ದು, ನನ್ನ ಎತ್ತೆ ಎನ್ನಲು ಏನು ಆಧಾರ?' ಎಂದು ಕೇಳಿದ.

ನೀತಿ :- ನ್ಯಾಯ ಸ್ಥಾನದಲ್ಲಿ ಇರುವವರು ಸ್ವಾರ್ಥಿಗಳಾದರೆ ಸರಿಯಾದ ನ್ಯಾಯ ಸಿಗುವುದಿಲ್ಲ.

## ಮಾನವರೂ ಪಾತ್ರಧಾರಿಗಳಾಗಿರುವ ಕತೆಗಳು

### ಒಗ್ಗಟ್ಟಿನಲ್ಲಿ ಬಲವಿದೆ

ಒಬ್ಬ ರೈತನಿಗೆ ನಾಲ್ಕು ಜನ ಗಂಡು ಮಕ್ಕಳಿದ್ದರು. ಯಾವಾಗಲೂ ಅವರು ಕಿತ್ತಾಡುತ್ತಿದ್ದರು. ರೈತ ಅವರಿಗೆ ಬುದ್ಧಿ ಹೇಳಿ ಸುಸ್ತಾದ. ಆದರೂ ಅವರು ಕಿತ್ತಾಡುವುದನ್ನು ನಿಲ್ಲಿಸಲಿಲ್ಲ.

ಒಂದು ದಿನ ರೈತ ಕಾಡಿಗೆ ಹೋದ. ಅಲ್ಲಿಂದ ಬರುವಾಗ ಒಂದು ಕಂತೆ ಕಡ್ಡಿಗಳನ್ನು ತಂದ.

ತನ್ನ ಮಕ್ಕಳನ್ನು ಒಬ್ಬೊಬ್ಬರಾಗಿ ಕರೆದು ರೈತ ಕಂತೆ ಮುರಿಯಲು ಹೇಳಿದ. ಯಾರಿಂದಲೂ ಸಾಧ್ಯವಾಗಲಿಲ್ಲ.

ರೈತ, ಒಂದೊಂದೇ ಕಡ್ಡಿ ಕೊಟ್ಟು ಮುರಿಯಲು ಹೇಳಿದ.

ಮಕ್ಕಳು ಕಡ್ಡಿಯನ್ನು ಚೂರು ಚೂರು ಮಾಡಿದರು.

ರೈತ ಕೂಡಲೇ ಹೇಳಿದ

'ನೀವೆಲ್ಲರೂ ಒಂದಾಗಿದ್ದರೆ ನಿಮ್ಮನ್ನು ಯಾರೂ ನಾಶ ಮಾಡಲು ಆಗುವುದಿಲ್ಲ. ಜಗಳ ಆಡಿಕೊಂಡಿದ್ದರೆ ನಾಶ ಮಾಡುವುದು ಸುಲಭ.' ಎಂದು.

ಮಕ್ಕಳಿಗೆ ಎಲ್ಲವೂ ಮನವರಿಕೆ ಆಯಿತು. ಅಂದಿನಿಂದ ಜಗಳ ಆಡುವುದನ್ನು ನಿಲ್ಲಿಸಿ ಎಲ್ಲರೂ ಒಗ್ಗಟ್ಟಿನಿಂದ ಜೀವನ ಸಾಗಿಸಿದರು.

**ಅಪರಾಧಿ ಯಾರು?**

ರಣ ಕಹಳೆ ಊದುವ ಒಬ್ಬ ಯುದ್ಧದ ನಂತರ ಶತ್ರುವಿಗೆ ಸಿಕ್ಕ.

'ಅಯ್ಯಯ್ಯೋ, ನನ್ನನ್ನು ಬಿಟ್ಟುಬಿಡಿ. ನಾನು ಯಾರನ್ನು ಕೊಂದಿಲ್ಲ. ಬರೀ ಕಹಳೆ ಊದಿದ್ದೇನೆ ಅಷ್ಟೇ' ಎಂದು ಸೈನ್ಯದ ಅಧಿಕಾರಿಯನ್ನು ಅಂಗಲಾಚಿದ. ಆಗ ಸೈನ್ಯದ ಅಧಿಕಾರಿ ;

'ನೀನು ಕೊಲ್ಲದಿದ್ದರೆ ಏನು? ನಿನ್ನ ಕಹಳೆ ಧ್ವನಿ ಕೇಳಿ ತಾನೇ ಸೈನಿಕರು ಯುದ್ಧ ಮಾಡುವುದು. ಆದ್ದರಿಂದ ಈ ರಕ್ತಪಾತಕ್ಕೆ ನೀನೇ ಕಾರಣ. ನಿನ್ನನ್ನೇ ಮೊದಲು ಕೊಲ್ಲುತ್ತೇನೆ.' ಎಂದ.

ನೀತಿ :- ಅಪರಾಧ ಮಾಡುವವನಿಗಿಂತ ಪ್ರೇರಿಸುವವನೇ ದೊಡ್ಡ ಅಪರಾಧಿ.

★ ★ ★

ನಮ್ಮ ಬಹುಸಂಖ್ಯಾತ ಸಮುದಾಯ ಅನಕ್ಷರಸ್ಥರೇ ಹೊರತು ಅವಿದ್ಯಾವಂತರಲ್ಲ. ನೃಪತುಂಗ ಹೇಳುವಂತೆ ಅವರು "ಚದುರರ್ ನಿಜದಿಂ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್". ಅನುಭವದಲ್ಲಿ, ವಿವೇಕದಲ್ಲಿ, ವ್ಯವಹಾರದಲ್ಲಿ, ತಿಳುವಳಿಕೆಯಲ್ಲಿ ಆ ಜನ ಚದುರರು. ಹೀಗೆಂದು ಅವರನ್ನು ಅಕ್ಷರದಲಿತರನ್ನಾಗಿಯೂ ಉಳಿಸುವಂತಿಲ್ಲ. ಅವರಲ್ಲಿ ಅಕ್ಷರ ಕಲಿಯುವ ಸಾಮರ್ಥ್ಯವಿದೆ. ಕಲಿಸುವ ಹೊಣೆ ಸರ್ಕಾರಗಳ, ವಿಶ್ವವಿದ್ಯಾಲಯಗಳ ಮೇಲಿದೆ. ಈ ನಿಟ್ಟಿನಲ್ಲಿ ದೇಶದಾದ್ಯಂತ ಸಾಕ್ಷರತಾ ಆಂದೋಲನ ನಡೆಯುತ್ತಿದೆ. ಆದರೆ ಈ ಅಕ್ಷರ ಸಂಸ್ಕೃತಿಯ ಆಂದೋಲನದಲ್ಲಿ ಕಲಿತವರಿಗೆ ಮತ್ತು ಕಲಿಯುವವರಿಗೆ ಉತ್ತಮ ಗುಣಮಟ್ಟದ ಪುಸ್ತಕಗಳ ಅವಶ್ಯಕತೆ ಇದೆ. ಕಲಿತವರು ಮರೆಯದಂತೆ, ಕಲಿಕೆಯನ್ನು ಮುಂದುವರಿಸುವಂತೆ ನೋಡಿ ಕೊಳ್ಳುವುದು ಎಲ್ಲರ ಕರ್ತವ್ಯ.

ಕನ್ನಡ ವಿಶ್ವವಿದ್ಯಾಲಯವು ನಾಡಿನ ಹಲವು ವಿದ್ವಾಂಸರೊಂದಿಗೆ ಸೇರಿ ನಡೆಸಿದ ಒಂದು ಸಾಮೂಹಿಕ ಪ್ರಯತ್ನದ ಫಲವಾಗಿ ಈ ಪುಸ್ತಕ ರೂಪತಾಳಿದೆ. ನವಸಾಕ್ಷರರು ಈ ಪುಸ್ತಕವನ್ನು ಪ್ರೀತಿಯಿಂದ ಸ್ವೀಕರಿಸುತ್ತಾರೆಂದು ನಂಬಿದ್ದೇವೆ. ಈ ಯೋಜನೆಯ ಯಶಸ್ಸಿಗೆ ಕಾರಣರಾಗಿರುವ ಉನ್ನತ ಸಲಹಾ ಸಮಿತಿ ಹಾಗೂ ಸಂಪಾದಕ ಸಮಿತಿಯ ಸದಸ್ಯರಿಗೆ, ಲೇಖಕರಿಗೆ, ಕಲಾವಿದರಿಗೆ ಹಾಗೂ ಈ ಯೋಜನೆಯಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ನಮ್ಮೊಡನೆ ಪಾಲ್ಗೊಂಡವರೆಲ್ಲರಿಗೂ ನಮ್ಮ ಹೃತ್ಪೂರ್ವಕವಾದ ವಂದನೆಗಳು. ನಮ್ಮ ವಿಶ್ವವಿದ್ಯಾಲಯದ ಮೇಲೆ ವಿಶ್ವಾಸವಿಟ್ಟು ಇಂತಹ ಒಂದು ಗುರುತರವಾದ ಯೋಜನೆಯನ್ನು ವಹಿಸಿಕೊಟ್ಟ ಲೋಕಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀಲೂಕೋಸ್ ವಲ್ಲತ್ತರೈ ಅವರಿಗೆ ನನ್ನ ಕೃತಜ್ಞತೆಗಳು. ಓದುಗರು ಈ ಪುಸ್ತಕದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ತಿಳಿಸಿದರೆ ನಮ್ಮ ಪಠ್ಯಪುಸ್ತಕ ರಚನೆಗೆ ಉಪಯೋಗವಾಗುತ್ತದೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು